ಡಾ|| ಶ್ರೀನಿವಾಸ ವೆಂ. ಪಾಡಿಗಾರ

# ಹುನಗುಂದ ತಾಲ್ಲೂಕಿನಲ್ಲಿ ಇತ್ತೀಚಿನ ಪುರಾತತ್ವ ಶೋಧನೆಗಳು

೧೯೮೮ ಮತ್ತು ೧೯೮೯ರ ಮಾರ್ಚ್ ತಿಂಗಳುಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತದ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗದ ವತಿಯಿಂದ ವಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನ ಕೆಲವು ಗ್ರಾಮಗಳ ಪುರಾತತ್ವ ಅನ್ವೇಷಣೆ ನಡೆಸಿದಾಗ ಆದಿ ಶಿಲಾಯುಗದಿಂದ ಇತ್ತೀಚಿನವರೆಗಿನ ಕೆಲವು ಮಹತ್ವದ ನೆಲೆಗಳು ನನ್ನ ಗಮನಕ್ಕೆ ಬಂದವು. ಮಧ್ಯಕಾಲೀನವರೆಗಿನ ಪ್ರಮುಖ ಪುರಾತತ್ವ ಶೋಧನೆಗಳನ್ನಿಲ್ಲಿ ಸಂಗ್ರಹವಾಗಿ ವರದಿ ಮಾಡುತ್ತಿದ್ದೇನೆ.[1]

**ಇತಿಹಾಸಪೂರ್ವ ಕಾಲದ ನೆಲೆಗಳು—ಪ್ರಾಚ್ಯಾವಶೇಷಗಳು:** ಮಲಪ್ರಭಾ ನದಿಯುಗುಂಟ ನದಿಯ ಪಾತ್ರದಲ್ಲಿ,ವಿವಿಧಗ್ರಾಮಗಳ ಸಮೀಪ ಆದಿಶಿಲಾಯುಗ ಕಾಲದ ಎಲ್ಲ ಹಂತಗಳಿಗನ್ವಯಿಸುವ ಪ್ರಾಚ್ಯಾವಶೇಷಗಳು ಕಂಡು ಬಂದವು. ಸಾಮಾನ್ಯವಾಗಿ ಕಂದುಮಿಶ್ರಿತ ಕೆಂಪು ವರ್ಣದ ಕ್ವಾರ್ಟ್‌ಜೈಟ್ ಶಿಲೆಯಲ್ಲಿ ತಯಾರಿಸಿದ ಕೈಗೊಡಲಿ (hand-axe), ಮಚ್ಚು (cleaver), ದುಂಡು ಗೊಡಲಿ (ovate) ಮುಂತಾದ ಅಶ್ಯೂಲಿಯನ್ ತಂತ್ರದಿಂದ ತಯಾರಿಸಿದ ಶಿಲಾ ಉಪಕರಣಗಳು ಪೂರ್ವ ಆದಿ ಶಿಲಾಯುಗದ್ದಾಗಿವೆ. ಬೆನಕನವಾರಿ, ಐಹೊಳೆ, ನಿಂಬಲಗುಂದಿ, ಹಳೇ ಕಡಿವಾಳ, ಹಿರೇಮಾಗಿ/ಚಿಕ್ಕಮಾಗಿ ಗ್ರಾಮಗಳ ಸಮೀಪ ಇಂಥ ಉಪಕರಣಗಳು ದೊರೆಯುತ್ತವೆ. ಉಪಕರಣಗಳು ಹೆಚ್ಚು ನುಣುಪಾಗಿರದೇ ಚಕ್ಕೆ ತೆಗೆದ ಗುರುತುಗಳು ಸ್ಪಷ್ಟವಾಗಿರುವದರಿಂದ (ಉದಾ.: ಹಿರೇಮಾಗಿ) ನದಿಯ ಸೆಳೆತದಿಂದ ಇವು ಹೆಚ್ಚು ದೂರ ಸಾಗಿಸಲ್ಪಟ್ಟಿಲ್ಲವೆಂದು ನಿರ್ಧರಿಸಬಹುದು. ಅಂತಾಗಿ ಈ ಪ್ರದೇಶದಲ್ಲಿ ಪೂರ್ವ ಆದಿಶಿಲಾಯುಗದಿಂದಲೇ ಮಾನವನ ವಸತಿಯಿದ್ದಿತೆಂದು ತಿಳಿಯಬಹುದಾಗಿದೆ.

ಮಧ್ಯ ಆದಿಶಿಲಾಯುಗಕ್ಕನ್ವಯಿಸುವ ಶಿಲಾ ಉಪಕರಣ ಮಾದರಿಗಳು ಮಲಪ್ರಭಾ ನದೀಪಾತ್ರದಲ್ಲಿ ಬೇವಿನಾಳದ ಸಮೀಪ ದೊರೆತಿವೆ. ಇವು ಸಾಮಾನ್ಯವಾಗಿ ಹೆರೆಯುವ ಉಪಕರಣಗಳು (scrapers). ಐಹೊಳೆಯ ರಾವಳಫಡಿ ಶೈವ ಗುಹಾಲಯದ ಹಿಂಬದಿಯ ಹೊಲದಲ್ಲಿ ದೊರೆತ, ಈಟಿಯ ಮೊನೆಯಂತಿರುವ ಉಪಕರಣ ಅಶ್ಯೂಲಿಯನ್ ತಂತ್ರದ ಕೊನೆಯ ಅವಧಿಯ ಸೂಚಕವಾಗಿದ್ದು, ಚಿಕ್ಕ ಕೈಗೊಡಲಿ ಎನ್ನಬಹುದಾದರೂ ಮಧ್ಯ ಆದಿ ಶಿಲಾಯುಗಕ್ಕೆ ಅನ್ವಯಿಸುವಂತಹದು. ಜಾಸ್ಪರ್ ಇಲ್ಲವೆ ಕ್ವಾರ್ಟ್‌ಜೈಟ್ ಶಿಲೆಯನ್ನು ಇವುಗಳಿಗೆ ಬಳಸಲಾಗಿದೆ.

ಉತ್ತರ ಆದಿಶಿಲಾಯುಗದ ಕುರುಹುಗಳು ಸಿದ್ಧನಕೊಳ್ಳ, ಐಹೊಳೆ (ಕ್ಯಾದಿಗ್ಗೇರಿಗೆ ಹೋಗುವ ಹಾದಿ

1 ಈ ಅನ್ವೇಷಣೆಯಲ್ಲಿ ನನ್ನ ವಿದ್ಯಾರ್ಥಿಮಿತ್ರ ಶ್ರೀ ಎಂ. ಎನ್. ಕಡಪಟ್ಟಿಯವರ ಸಹಕಾರ ಪಡೆದಿದ್ದೇನೆ. ಅವರ ಸಹಾಯವನ್ನಿಲ್ಲಿ ಸ್ಮರಿಸುತ್ತೇನೆ.

ಯಲ್ಲಿ), ಬೇವಿನಾಳ ಮತ್ತು ಹಳೇ ಕಡಿವಾಳಗಳಲ್ಲಿ ಕಂಡುಬಂದಿವೆ. ಬೇವಿನಾಳದಲ್ಲಿ ದೊರೆತ ಚರ್ಟ್ ಶಿಲೆ(?)ಯ ತಿರುಳುಗಲ್ಲು (core) ಸಮೀಪದಲ್ಲೇ 'ಉದ್ಯಮ' ನೆಲೆ ಇರಬಹುದಾದ ಸೂಚನೆ ನೀಡಿದೆ. ಹಳೇ ಕಡಿವಾಳದಲ್ಲಿ ಹಕ್ಕಿಯ ಚುಂಚಿನಾಕಾರದ 'ಬ್ಯೂರಿನ್' ಮಾದರಿಯ ಉಪಕರಣ ದೊರತಿದೆ. ಸಿದ್ಧನಕೊಳ್ಳದಲ್ಲಿ ದೊರೆತ ಚಪ್ಪಟೆ ಹಳದೀವರ್ಣದ ಶಿಲೆಯ ತುಣುಕಿನ ಮೇಲೆ ಹಕ್ಕಿಯ ರೆಕ್ಕೆಯಂತೆ ಕಾಣುವ ಕೊರೆದು ಮಾಡಿದ ಚಿತ್ರವಿದ್ದು, ಉತ್ತರ ಆದಿಶಿಲಾಯುಗದ ಕಲೆಯ ಅಪರೂಪದ ಮಾದರಿಯಾಗಿದೆ. ರಾಜಸ್ಥಾನದ ಚಂದ್ರಾವತಿಯಲ್ಲಿ (ಸಿರೋಹಿ ಜಿಲ್ಲೆ) ದೊರೆತ ಮಧ್ಯಶಿಲಾಯುಗದ ತಿರುಳಿನ ಮೇಲೆ ಕೊರೆದಿರುವ ಚಿತ್ರವನ್ನು ಇದು ನೆನಪಿಸುತ್ತದೆ.[2] ಕರ್ನಾಟಕದಲ್ಲಿ ಆದಿಶಿಲಾಯುಗದ ಕಲೆಯ ಮಾದರಿ ಬಹುಶಃ ಈವರೆಗೆ ಇದೊಂದೆ. ಆದ್ದರಿಂದ ಮಹತ್ವದ ಶೋಧನೆಯಿದು.

ನೂತನ ಶಿಲಾಯುಗದ ನುಣುಪಿಸಿ ಹೊಳಪಿಸಿರುವ ಕೊಡಲಿ ಹಳೇ ಬೂದಿಹಾಳದಲ್ಲಿ ದೊರೆತಿದೆ. ಈ ನೆಲೆಯನ್ನೂ ಇನ್ನೂ ಹೆಚ್ಚು ಪರಿಶೀಲಿಸುವ ಅವಶ್ಯಕತೆಯಿದೆ.

**ಕಬ್ಬಿಣಯುಗದ ಬೃಹತ್‌ಶಿಲಾಸಮಾಧಿಗಳು** ಐಹೊಳೆ, ಬೇಲಾಪೂರ, ಕ್ಯಾದಿಗೇರಿಗಳಲ್ಲಿ ಡಾ॥ ಅ. ಸುಂದರ ಅವರಿಂದ ಈಗಾಗಲೇ ಶೋಧಿಸಲ್ಪಟ್ಟಿವೆ.[3] ಬೃಹತ್‌ಶಿಲಾಸಮಾಧಿಗಳ ಇನ್ನೊಂದು ಹೊಸ ಗುಂಪು ಸಿದ್ಧನಕೊಳ್ಳದಲ್ಲಿ ನನ್ನ ಅನ್ವೇಷಣೆಯಲ್ಲಿ ಕಂಡುಬಂದಿತು. ಈ ಗುಂಪಿನ ಸುಮಾರಾಗಿ ಎಲ್ಲ ಸಮಾಧಿಗಳೂ ಬಹಳ ಜೀರ್ಣಸ್ಥಿತಿಯಲ್ಲಿದ್ದು ಬಹುಶಃ ಕೊಳ್ಳೆ ಹೊಡೆಯಲ್ಪಟ್ಟಿವೆ. ಚಪ್ಪಡಿಕಲ್ಲುಗಳು (cap-stones), ಬದಿಯ ಶಿಲಾಫಲಕಗಳು (orthostats) ಚದುರಿಕೊಂಡು ಬಿದ್ದಿವೆ. ಕೆಲವು ಸಮಾಧಿಗಳ 'ಪ್ಯಾಸೇಜ್'ಗಳು ಮತ್ತು ಅವುಗಳ ಮೇಲಿನ ಚಪ್ಪಡಿಗಳು ಅಲ್ಲಲ್ಲಿ ಉಳಿದಿರುವುದು ಕಂಡುಬರುತ್ತದೆ. ಈ ಹೊಸ ಬೃಹತ್‌ಶಿಲಾ ಸಮಾಧಿಗಳ ಗುಂಪಿನ ಶೋಧನೆಯೊಂದಿಗೆ ಪಟ್ಟದಕಲ್ಲು ಮತ್ತು ಐಹೊಳೆ–ಬೇಲಾಪೂರಗಳ ಮಧ್ಯವರ್ತಿ ಪ್ರದೇಶದಲ್ಲಿ ಕೂಡ ಕಬ್ಬಿಣಯುಗದ ಜನರ ವಸತಿಯ ಕುರುಹು ದೊರೆತಂತಾಗಿದೆ.

**ಇತಿಹಾಸ ಆರಂಭ ಕಾಲದ ನೆಲೆ-ಹಿರೇಮಾಗಿ :** ನನ್ನ ಸರ್ವೇಕ್ಷಣದಲ್ಲಿ ಕಂಡುಬಂದ ಅತಿ ಮಹತ್ವದ ನೆಲೆಯೆಂದರೆ ಇತಿಹಾಸ ಆರಂಭಕಾಲದ ಪಟ್ಟಣದ ಕುರುಹುಳ್ಳ ಹಿರೇಮಾಗಿ. ಮಲಪ್ರಭಾ ನದಿಯ ಬಲದಂಡೆಯ ಮೇಲಿರುವ ಈ ನೆಲೆ ಅಮೀನಗಡದಿಂದ ಸುಮಾರು ೯ ಕಿ.ಮೀ. ದೂರದಲ್ಲಿದೆ. ಊರು ಈಗ ಬಲು ಚಿಕ್ಕ ಹಳ್ಳಿಯಾಗಿದ್ದರೂ ಹಿಂದೆ 'ಪಟ್ಟಣ'ವಾಗಿದ್ದಿರಬಹುದೆಂಬ ಸೂಚನೆಗಳು ಸಾಕಷ್ಟಿವೆ. ಊರ ದಕ್ಷಿಣ ಬದಿಗೆ ಹಾಳುಮಣ್ಣಿಗಾಗಿ ನಿವೇಶನವನ್ನು ಸಾಕಷ್ಟು ಹಾಳು ಮಾಡಲಾಗಿದ್ದು, ಅಲ್ಲಲ್ಲಿ ಸುಮಾರು ३ ರಿಂದ ४ ಮೀಟರಿನಷ್ಟು ಎತ್ತರದ ಲಂಬಛೇದಗಳು ಕಂಡುಬರುತ್ತವೆ. ಬೂದಿಮಿಶ್ರಿತ ಮಣ್ಣು, ಉಂಡೆ ಕಲ್ಲುಗಳು, ಇಟ್ಟಿಗೆಗಳು, ಪೊಟಿನ್ ನಾಣ್ಯಗಳು, 'ಆಂಧ್ರ ಸಂಸ್ಕೃತಿ'ಯ ಮಡಕೆಗಳು ಈ ನೆಲೆಯು ಇತಿಹಾಸ ಆರಂಭ ಕಾಲದ್ದೆಂದು, ಅಂದರೆ ಶಾತವಾಹನರ ಕಾಲದ್ದೆಂದು ಸ್ಪಷ್ಟಪಡಿಸುತ್ತವೆ. ಲಂಬಛೇದದಲ್ಲಿ ವೃತ್ತಾಕಾರದ ಬಾವಿಯೊಂದರ ಅಳಿದುಳಿದ ಭಾಗ ಕಾಣದೊರೆಯಿತು. ಇದನ್ನು ಕೀಲಿನಾಕಾರದ (wedge-shaped) ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. (ಇಟ್ಟಿಗೆಯ ಗಾತ್ರ ಹೀಗಿದೆ : ಎತ್ತರ ೭ ಸೆಂ.ಮೀ., ಸಮನಾಂತರ ಬದಿಗಳು ಕ್ರಮವಾಗಿ ೨೨ ಮತ್ತು ೧३ ಸೆಂ.ಮೀ. ಹಾಗೂ ಒಳಮುಖವಾಗಿರುವ ಬದಿಗಳು ೨೬ ಸೆಂ.ಮೀ.) ಕಟ್ಟಡಗಳ ಸ್ಪಷ್ಟ ಚಲನಕ್ಷೆ ಯಾವುದೂ ಕಂಡುಬರಲಿಲ್ಲ.

2 V.H. Sonawane: 'An Engraved Mesolithic Core from Chandravati, Rajasthan' in *Archaeology and History* (*Essays in Memory of Shri A. Ghosh*), Delhi, 1987, pp. 53–56

3 A. Sundara : *Early Chamber Tombs of South India*, Delhi, 1975, p. 227

ಇಟ್ಟಿಗೆಗಳು ಸಾಮಾನ್ಯವಾಗಿ ೮ × ೨೦ × ೪೦ ಸೆಂ.ಮೀ. ಗಾತ್ರದವಾಗಿವೆ. ಈಗಿನ ಹಳ್ಳಿಯು ನಿವೇಶನದ ಕೇವಲ ಒಂದು ಭಾಗವನ್ನು ಮಾತ್ರ ಆಕ್ರಮಿಸಿದೆ ಎಂದರೆ ಮೂಲ ನಿವೇಶನದ ಪ್ರದೇಶ ಎಷ್ಟಿದ್ದಿರಬಹುದೆಂದು ಊಹಿಸಬಹುದು.

ಮಡಕೆಗಳು ಸಾಮಾನ್ಯವಾಗಿ ಎರಡು ವಿಧದ್ದಾಗಿವೆ : ಚಿತ್ರ ಬಿಡಿಸಿರದ ಕೆಂಪು ಮಡಕೆಗಳು ಮತ್ತು ಬಿಳಿ ಕಾವೋಲಿನ್ ಬಳಸಿ ಚಿತ್ರ ಬಿಡಿಸಿರುವ 'ರಸೆಟ್ ಕೋಟೆಡ್' ಮಡಕೆಗಳು. ಇಂಗ್ಲೀಷ್ 'ವಿ' ಆಕಾರದ ಲಂಬಛೇದವುಳ್ಳ ಪಾತ್ರೆಗಳು, ಮುಚ್ಚಳ, ತಟ್ಟೆಯಾಕಾರದ ಪಾತ್ರೆಗಳು, ಬಟ್ಟಲುಗಳು, ಗುಂಡಿ, ಕೊಡ, ಲೋಟ ಇತ್ಯಾದಿಗಳು ಸಾಮಾನ್ಯವಾಗಿವೆ. 'ಆಂಫೋರಾ' ಮಧ್ಯ ಕುಂಬದ ಜೋಡು ಹಿಡಿಕೆಯ ಭಾಗ(?) ಹಾಗೂ 'ರೌಲೆಟೆಡ್' ತಟ್ಟೆಯ ಒಂದು ಭಾಗ ರೋಮನ್ ಸಂಸ್ಕೃತಿಯ ಸಂಬಂಧದ ಕುರುಹಾಗಿರಬಹುದು. ಇತರ ಪ್ರಾಚ್ಯಾವಶೇಷಗಳಲ್ಲಿ ಸುಟ್ಟ ಮಣ್ಣಿನ, ದಂತದ, ಕಾರ್ನೇಲಿಯನ್ ಶಿಲೆಯ ಮಣಿಗಳು ಸೇರಿವೆ.

ನಾಣ್ಯಗಳು ಪೊಟಿನ್ ಲೋಹದ್ದಾಗಿದ್ದು, ಸಾಮಾನ್ಯವಾಗಿ ಒಂದು ಬದಿಗೆ ನಿಂತ ವೃಷಭದ ಎಡ ನೋಟವನ್ನು, ಹಿಂಬದಿಗೆ ಗುಡ್ಡ, ಅರ್ಧಚಂದ್ರ, ಶ್ರೀವತ್ಸ (?) ಮತ್ತು ಬೇಲಿಯೊಳಗಿರುವ ವೃಕ್ಷ, ಅಥವಾ ಗುಡ್ಡದ ಕೆಳಗೆ ನದಿ ಇರುವ ಚಿತ್ರ ಹೊಂದಿವೆ. ಒಂದು ನಾಣ್ಯದ ಮೇಲೆ ಸದರ (?) ಮಹಾರಠಿಸ ಎಂಬ ಬ್ರಾಹ್ಮೀ ಅಕ್ಷರಗಳಿವೆ. ಇವು ಮಹಾರಠಿಗಳ ನ್ಯಾಣಗಳೆಂಬುದು ಸ್ಪಷ್ಟವಿದೆ.

ಮಲಪ್ರಭಾ ನದಿಗುಂಟ ಶಾತವಾಹನ ಕಾಲೀನ ನೆಲೆಗಳಿರುವುದು [ಉದಾ. : ವಾಸನ (ನರಗುಂದ ತಾಲ್ಲೂಕು), ಪಟ್ಟದಕಲ್ಲು (ಬಾದಾಮಿ ತಾಲ್ಲೂಕು), ಐಹೊಳೆ (ಹುನಗುಂದ ತಾಲ್ಲೂಕು)] ಈಗಾಗಲೇ ಗೊತ್ತಿದ್ದು ಹಿರೇಮಾಗಿ ನೆಲೆಯ ಶೋಧನೆಯೊಂದಿಗೆ ಮತ್ತೊಂದು ಮಹತ್ವದ ನೆಲೆ ಬೆಳಕಿಗೆ ಬಂದಂತಾಗಿದೆ. ದುರದೃಷ್ಟವಶಾತ್ ಈ ನೆಲೆಯ ಅವಶೇಷಗಳು ಲೂಟಿಯಾಗಿದ್ದು, ಲೂಟಿ ಇನ್ನೂ ನಡೆಯುತ್ತಿದೆ.

**ಮಧ್ಯಕಾಲೀನ ಪ್ರಾಚ್ಯಾವಶೇಷಗಳು : ಗುಡೂರಿನ ರಾಮಲಿಂಗ ದೇವಾಲಯ :** ಗುಡೂರಿನ ಮರಳುಗಲ್ಲಿನಿಂದ ನಿರ್ಮಿತವಾದ ಕಲ್ಯಾಣ ಚಾಲುಕ್ಯರ ಆರಂಭಕಾಲದ್ದೆನ್ನಬಹುದಾದ ವೇಸರ ಮಾದರಿಯ ರಾಮಲಿಂಗ ದೇವಾಲಯವಿದೆ. ಗರ್ಭಗೃಹ, ಅಂತರಾಳ, ಸಭಾಮಂಟಪ ಹೊಂದಿರುವ ಈ ದೇವಾಲಯಕ್ಕೆ ಮೂಲದಲ್ಲಿ ಮುಖಮಂಟಪವೂ ನಂದಿಮಂಟಪವೂ ಇದ್ದ ಕುರುಹುಗಳಿವೆ. ಗರ್ಭಗೃಹದಲ್ಲಿ ಗೋಡೆಗಳಲ್ಲಿ ಗೂಡುಗಳಿದ್ದು, ಅವುಗಳ ಮೇಲಿನ ಮಕರತೋರಣಗಳು ಬ್ರಹ್ಮ (ದಕ್ಷಿಣ), ಶಿವ (ಪಶ್ಚಿಮ) ಮತ್ತು ವಿಷ್ಣು (ಉತ್ತರ) ದೇವತೆಗಳ ಚಿಕಣಿ ಶಿಲ್ಪಗಳನ್ನು ಒಳಗೊಂಡಿವೆ. ಗೂಡುಗಳ ಗಾತ್ರವನ್ನು ಗಮನಿಸಿದರೆ ಅವುಗಳಲ್ಲಿ ಈ ದೇವತೆಗಳ ವಿಗ್ರಹವನ್ನು ಸೇರಿಸಿರುವದು ಅಸಾಧ್ಯವೆಂದು ತೋರುತ್ತದೆ. ಅರಸೀಬೀದಿಯ ಗುಣದ ಬೆಡಂಗಿ ಜಿನಾಲಯದ ಗರ್ಭಗೃಹದಲ್ಲಿಯೂ ಇದೇರೀತಿ ಗೂಡುಗಳು, ಮಕರತೋರಣ (ಇಲ್ಲಿ ಜಿನಬಿಂಬಗಳೊಂದಿಗೆ) ಇರುವುದು ಕಂಡುಬರುತ್ತದೆ. ಈ ವ್ಯವಸ್ಥೆ ಈ ಭಾಗದ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯಗಳ ವಿಶಿಷ್ಟ ಲಕ್ಷಣವೇನೋ ಎಂಬುದನ್ನು ಹೆಚ್ಚಿನ ಅಧ್ಯಯನ ಮಾಡಿ ನೋಡಬೇಕಾಗಿದೆ.

ರಾಮಲಿಂಗ ದೇವಾಲಯದ ಇನ್ನೊಂದು ವೈಶಿಷ್ಟ್ಯವೆಂದರೆ ಅದನ್ನು ನಿರ್ಮಿಸಲು ಬಳಸಿರುವ ಪ್ರತಿಯೊಂದು ಕಲ್ಲಿನ ಹೊರ ಮೈಯಲ್ಲೂ ಒಂದಿಲ್ಲೊಂದು ಅಂಕೆಯನ್ನು (ಕ್ರಿ.ಶ. ೧೧ನೇ ಶತಮಾನದ ಕನ್ನಡ ಅಂಕೆಗಳು) ಕೊರೆದಿರುವುದು. ಬಹುಶಃ ಶಿಲ್ಪಿಗಳಿಂದ ತಯಾರಿಸಲ್ಪಟ್ಟ ಘನಗಳು ಎಲ್ಲೆಲ್ಲಿ ಬರಬೇಕು ಎಂಬುದನ್ನು ಸೂಚಿಸಲು ಈ ಅಂಕೆಗಳ ಗುರುತುಗಳನ್ನು ಮಾಡಿಕೊಂಡಿದ್ದಿರಬೇಕು. ಅಲ್ಲಲ್ಲಿ ಕೆಲವು ಅಕ್ಷರಗಳೂ ಕಂಡುಬರುತ್ತಿದ್ದು, ಇವು ಬಹುಶಃ ಶಿಲ್ಪಿಗಳ ಹೆಸರಿನ ಮೊದಲ ಅಕ್ಷರಗಳಿರಬಹುದು.